# ಶಿಕ್ಷಣದ ಸಮಾಜಶಾಸ್ತ್ರಕ್ಕೆ ಪ್ರಸ್ತಾವನೆ

**ಅಮನ್ ಮದಾನ್**

> “ಅದು ಚಳಿಗಾಲದ ಒಂದು ಮುಂಜಾವು. ತುಂಬಾ ಚಳಿ ಮತ್ತು ಮಂಜಿನಿಂದ ಕೂಡಿತ್ತು. ನಾನು ಶಾಲನ್ನು ಸುತ್ತಿಕೊಂಡು ಚಹಾ ಕುಡಿಯುತ್ತಿದ್ದ ರೈತರ ಗುಂಪಿನೊಂದಿಗೆ ಕುಳಿತಿದ್ದೆ. ಅವರು ಶಾಲೆಯನ್ನು ಹೇಗೆ ಭಾವಿಸಿಕೊಂಡಿದ್ದಾರೆ, ಮಕ್ಕಳನ್ನು ಅವರೇಕೆ ಶಾಲೆಗೆ ಕಳುಹಿಸುತ್ತಾರೆ, ಇವನ್ನು ಅರ್ಥಮಾಡಿಕೊಳ್ಳಲು ನನಗಿರುವ ಆಸಕ್ತಿಯ ಬಗೆಗೆ ಅವರೊಂದಿಗೆ ಮಾತನಾಡಲು ಪ್ರಯತ್ನಿಸುತ್ತಿದ್ದೆ. ಆಗ ರೈತನೊಬ್ಬ, ತಿರಸ್ಕಾರದ ಭಾವದಿಂದ ಹೇಳಿದ “ಶಿಕ್ಷಣ! ನಿಷ್ಪ್ರಯೋಜಕವಾದದ್ದು. ಅದು ನಮಗೇನು ಮಾಡುತ್ತದೆ? ಇಲ್ಲಿ ನೋಡಿ ನನ್ನ ಮಗ” ಎನ್ನುತ್ತಾ ಮುಜುಗರದಿಂದ ನಿಂತಿದ್ದ ಬಡಕಲು ಯುವಕನ ಕಡೆಗೆ ತೋರಿಸಿದ, “ಈತ ಹತ್ತನೇ ತರಗತಿಯಲ್ಲಿ ಸಾಮಾನ್ಯ ದರ್ಜೆಯಲ್ಲಿ ತೇರ್ಗಡೆಯಾಗಿದ್ದಾನೆ. ಅದು ಅವನನ್ನು ನಿಷ್ಪ್ರಯೋಜಕನನ್ನಾಗಿಸಿದೆ. ಈಗ ಇವನು ತಾನು ಈ ಗ್ರಾಮದಲ್ಲೇ ಅತಿ ಬುದ್ಧಿವಂತ ಎಂದುಕೊಂಡಿದ್ದಾನೆ. ಇನ್ನು ಈತ ಹೊಲದಲ್ಲಿ ದುಡಿಯುವುದೂ ಇಲ್ಲ, ಈತನಿಗೆ ಪೇಟೆಯಲ್ಲಿ ಯಾವುದೇ ಕೆಲಸ ಸಿಗುವುದೂ ಇಲ್ಲ. ಇಂತಹ ಶಿಕ್ಷಣದಿಂದ ನಮಗೇನು ಪ್ರಯೋಜನ!”

ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳು ತೀವ್ರಗತಿಯಲ್ಲಿ ಬದಲಾಗುತ್ತಿವೆ. ಹೊಸ ರೀತಿಯ ಜೀವನ ವಿಧಾನಗಳು ರೂಪುಗೊಳ್ಳುತ್ತಿವೆ. ನಾವು ಇವುಗಳನ್ನು ಆಳವಡಿಸಿಕೊಳ್ಳದಿದ್ದರೂ, ಇವುಗಳನ್ನು ನಾವು ಅರ್ಥಮಾಡಿಕೊಳ್ಳಬೇಕಿದೆ. ಪ್ರತಿಯೊಂದು ತಿರುವಿನಲ್ಲಿಯೂ ನಾವು ಹೊಸದಾದ ಮತ್ತು ಕಠಿಣವಾದ ಸವಾಲುಗಳನ್ನು ಎದುರಿಸುತ್ತಿರುವಂತೆ ತೋರುತ್ತಿದೆ. ನಮಗೆ ನಾವು ಈಗ ಕೇಳಿಕೊಳ್ಳಬೇಕಾದ ಪ್ರಶ್ನೆಯೆಂದರೆ, ನಾವು ನಮ್ಮ ಪೂರ್ವಜರ ಸಂಪ್ರದಾಯಗಳನ್ನು ಉಳಿಸಿಕೊಳ್ಳಬೇಕೇ? ಹೌದಾದರೆ ಯಾವುದನ್ನು ಉಳಿಸಿಕೊಳ್ಳಬೇಕು ಮತ್ತು ಯಾವುದನ್ನು ಬಿಡಬೇಕು? ನಮಗೆ ಶಾಲಾ ಕಾಲೇಜುಗಳಲ್ಲಿ ನಮ್ಮ ಕುಟುಂಬಗಳ ಪ್ರಾಚೀನ ಸಂಸ್ಕೃತಿಯನ್ನು ಕಲಿಸಿಕೊಡುವುದಿಲ್ಲ. ನಮ್ಮನ್ನು ಇದು ವಾಸ್ತವಿಕವಾಗಿ ನಮ್ಮ ಪೂರ್ವಜರ ಮೌಲ್ಯ ಮತ್ತು ವೃತ್ತಿಗಳಿಗಿಂತ ಆಚೆಗೆ, ಭಿನ್ನವಾದ ಮೌಲ್ಯ ಮತ್ತು ವೃತ್ತಿಗಳ ಕಡೆಗೆ ಕೊಂಡೊಯ್ಯುತ್ತಿದೆ. ಮತ್ತೊಂದು ಕಡೆ ಶಿಕ್ಷಣವು ಒದಗಿಸುತ್ತಿರುವ ಮೌಲ್ಯಗಳ ಬಗ್ಗೆ, ಅವು ಹಳೆಯ ವಿಧಾನಗಳಲ್ಲಿ ಸೃಷ್ಟಿಸುತ್ತಿರುವ ತಲ್ಲಣಗಳ ಬಗ್ಗೆ ಅಸಮಾಧಾನವೂ ಇದೆ. ಒಟ್ಟಾರೆಯಾಗಿ, ಸಮಾಜದ ವಾಣಿಜ್ಯೀಕರಣವು ಜರುಗುತ್ತಿದ್ದು, ಇದು ಕುಟುಂಬ ಮತ್ತು ಸಮುದಾಯಗಳ ಬಾಂಧವ್ಯಗಳನ್ನು ದುರ್ಬಲಗೊಳಿಸುತ್ತಿರುವಂತೆ ಭಾಸವಾಗುತ್ತಿದೆ. ಉತ್ತಮ ಸಂಬಳದ ಕೆಲಸಗಳು ಅನೇಕ ವೇಳೆ ಕುಟುಂಬಗಳಿಂದ ದೂರ ಹೋಗುವಂತೆ ಮಾಡುತ್ತವೆ. ಯುವಕರ ಬಗೆಗೆ, ಅವರು ಒರಟರು ಮತ್ತು ಅವಿಧೇಯರಾಗುತ್ತಿದ್ದಾರೆ ಎನ್ನುವ ದೂರುಗಳು ಸಾಮಾನ್ಯವಾಗುತ್ತಿವೆ. ಅವರು ತಮ್ಮ ಹೆಚ್ಚಿನ ಸಮಯ ಮೊಬೈಲ್ ಫೋನ್‌ನಲ್ಲಿಯೇ ಕಳೆಯುತ್ತಿರುವುದರಿಂದ, ಕುಟುಂಬಕ್ಕೆ ಅವರ ಬಳಿ ಸಮಯವೇ ಇಲ್ಲವೆಂದು ಹೇಳಲಾಗುತ್ತಿದೆ. ಹೆಚ್ಚಿನ ವಿದ್ಯಾರ್ಥಿಗಳಿಗೆ ತಮ್ಮ ಗುರಿಯನ್ನು ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣದತ್ತ ಇರಿಸಿಕೊಳ್ಳಬೇಕೆಂದು ಹೇಳಿಕೊಡಲಾಗುತ್ತಿದೆ. ಈ ಶಿಕ್ಷಣವು ಉದ್ಯೋಗವನ್ನು ಒದಗಿಸಿಕೊಡುತ್ತದೆ ಎಂದು ಹೇಳಲಾಗುತ್ತದೆ ಮತ್ತು ಅದೇ ಸಮಯದಲ್ಲಿ ವೃತ್ತಿಪರ ಉದ್ಯೋಗಗಳ ಭರವಸೆಯನ್ನು ಅತಿಕಡಿಮೆ ಸಂಖ್ಯೆಯ ಜನರಿಗೆ ಮಾತ್ರ ಪೂರೈಸಲಾಗುತ್ತಿದೆ. ಭಾರತದಲ್ಲಿ ಕೃಷಿಯು ಬಹುತೇಕ ನಿಂತ ನೀರಾಗಿದ್ದು ಕೃಷಿಯಿಂದ

ತಪ್ಪಿಸಿಕೊಳ್ಳುವ ಒಂದು ಮಾರ್ಗವನ್ನಾಗಿ ಶಿಕ್ಷಣವನ್ನು ನೋಡಲಾಗುತ್ತಿದೆ. ಇವುಗಳ ನಡುವೆ -ಜನರನ್ನು ಹೆಚ್ಚು ಸೂಕ್ಷ್ಮ ಮತ್ತು ಚಿಂತನಶೀಲರನ್ನಾಗಿಸುವ ವಿಷಯಗಳಾದ- ಕಲೆ ಮತ್ತು ತತ್ತ್ವಶಾಸ್ತ್ರಗಳು ಕೇಳುವವರಿಲ್ಲದೆ ಸೊರಗುತ್ತಿವೆ. ಹೀಗೆ ಶಿಕ್ಷಣವು ಅಭಿವೃದ್ಧಿಶೀಲ ದೇಶಗಳಲ್ಲಿ ಹಲವು ಮೂಲಭೂತ ಬಿಕ್ಕಟ್ಟುಗಳ ಮಧ್ಯೆ ಸಿಲುಕಿಕೊಂಡಿದೆ. ಮಹಿಳೆಯರು ತಾವು ಮನೆಯಲ್ಲಿ ಗೃಹಕೃತ್ಯಗಳಲ್ಲಿ ನಿರತರಾದ ಹೆಂಡತಿಯರು ಹಾಗೂ ತಾಯಂದಿರಾಗಷ್ಟೇ ಇರುವುದರ ಬದಲಾಗಿ, ಶಿಕ್ಷಣ ಪಡೆದುಕೊಂಡು ಕೆಲಸಗಳಿಗೆ ಹೋಗಬೇಕೆಂದು ಹೇಳುತ್ತಿದ್ದಾರೆ. ಹಲವು ಸಮುದಾಯಗಳು ಹಿಂದೆಂದಿಗಿಂತಲೂ ಇಂದು ಹೆಚ್ಚಿನ ಉದ್ಯೋಗಳಿಗೆ ಬೇಡಿಕೆ ಇಡುತ್ತಿವೆ. ಆದರೆ ನಮ್ಮ ನಡುವೆ, ಈ ಬೇಡಿಕೆಯನ್ನು ಪೂರೈಸಬಲ್ಲಷ್ಟು ಉದ್ಯೋಗಳೇ ಇಲ್ಲ.

## ಸಮಾಜಶಾಸ್ತ್ರೀಯ ದೃಷ್ಟಿಕೋನದ ಮಹತ್ವ

ಶಿಕ್ಷಣವನ್ನು ಹೆಚ್ಚಾಗಿ, ಮನಶಾಸ್ತ್ರೀಯವಾದ ಒಂದು ಸವಾಲನ್ನಾಗಿ ಅಥವಾ ತರಗತಿಗೆ ಮತ್ತು ಕುಟುಂಬಕ್ಕೆ ಸೀಮಿತಗೊಳಿಸಿ ನೋಡಲಾಗುತ್ತಿದೆ. ಶಿಕ್ಷಣವನ್ನು ಸುಧಾರಿಸುವುದು ಎಂದರೆ, ಉತ್ತಮವಾಗಿ ಪಾಠಮಾಡುವುದು ಹೇಗೆ, ಆಸಕ್ತಿದಾಯಕ ಪಠ್ಯಪುಸ್ತಕಗಳನ್ನು ಬರೆಯುವುದು ಹೇಗೆ ಮತ್ತು ತರಗತಿಗಳನ್ನು ಹೆಚ್ಚು ಕ್ರಿಯಾಶೀಲವಾಗಿ ನಿಭಾಯಿಸುವುದು ಹೇಗೆ ಎಂಬಿತ್ಯಾದಿ ಅಂಶಗಳ ಕಡೆಗೆ ಹೆಚ್ಚಿನ ಒಲವು ತೋರಲಾಗುತ್ತಿದೆ. ಈ ಎಲ್ಲವನ್ನು ಮತ್ತು ಇನ್ನೂ ಹಲವು ಶೈಕ್ಷಣಿಕ ವಿಷಯಗಳನ್ನು ಸಮಾಜದ ಚಾರಿತ್ರ್ಯಗಳು ಮತ್ತು ಅದರಲ್ಲಿ ಸಂಭವಿಸುವ ಬದಲಾವಣೆಗಳು ಆಳವಾಗಿ ಪ್ರಭಾವಿಸುತ್ತವೆ ಎಂದು ನಾನಿಲ್ಲಿ ಸೂಚಿಸಬಯಸುತ್ತೇನೆ. ಉದಾಹರಣೆಗೆ, ಸಣ್ಣ ಪ್ರಮಾಣದ, ಬದಲಾಗದ ಸಮಾಜಗಳು ದೊಡ್ಡದಾದ, ಸಂಕೀರ್ಣವಾದ, ಶೀಘ್ರವಾಗಿ ಬದಲಾವಣೆಗೆ ಒಳಪಡುವ ಸಮಾಜಗಳ ಶೈಕ್ಷಣಿಕ ಗುರಿಗಳಿಗಿಂತ ಭಿನ್ನವಾದ ಹಲವು ಶೈಕ್ಷಣಿಕ ಗುರಿಗಳನ್ನು ಹೊಂದಿರುತ್ತವೆ. ಮಾನವಶಾಸ್ತ್ರಜ್ಞೆ ಮಾರ್ಗರೇಟ್ ಮೀಡ್ (1970:1) ಸೂಚಿಸುವಂತೆ, ಬದಲಾಗದ ಒಂದು ಸಮಾಜದಲ್ಲಿ ಯುವಕರಿಗೆ ತಮ್ಮ ಹಿರಿಯರಿಗೇನು ತಿಳಿದಿತ್ತೋ ಅದನ್ನೇ ಕಲಿಯುವ ಅನಿವಾರ್ಯತೆ ಇರುತ್ತದೆ. ಬದಲಾಗುತ್ತಿರುವ ಸಮಾಜದಲ್ಲಾದರೂ ಯುವಕರ ಕಲಿಕೆಯಿಂದ ಹಿರಿಯರು ಪ್ರಯೋಜನ ಪಡೆಯುತ್ತಾರೆ. ಶಿಕ್ಷಣದ ಗುರಿ ಮತ್ತು ಉದ್ದೇಶಗಳು ಒಂದು ಸಮಾಜದ ಚಾರಿತ್ರ್ಯ ಮತ್ತು ಅದರಲ್ಲಿ ಏರ್ಪಡುವ ಬದಲಾವಣೆಯ ಜೊತೆಗೆ ಅತ್ಯಂತ ಸಮೀಪದ ಸಂಬಂಧವನ್ನು ಹೊಂದಿರುತ್ತವೆ.

ಸಮಾಜಶಾಸ್ತ್ರೀಯ ದೃಷ್ಟಿಕೋನವು ವ್ಯಕ್ತಿಗತ ಅಥವಾ ಜೀವಶಾಸ್ತ್ರೀಯ ದೃಷ್ಟಿಕೋನಗಳಿಗಿಂತ ಭಿನ್ನವಾದುದು. ಪ್ರಾಯಃ ಈ ಭಿನ್ನತೆಯೇ ಈ ದೃಷ್ಟಿಕೋನಕ್ಕೆ ಮಹತ್ವ ತಂದುಕೊಟ್ಟಿರುವುದು. ಉದಾಹರಣೆಗೆ, ವಿದ್ಯಾರ್ಥಿನಿಯೊಬ್ಬಳು ಪರೀಕ್ಷೆಯಲ್ಲಿ ಅತ್ಯುನ್ನತ ಶ್ರೇಣಿಯಲ್ಲಿ ತೇರ್ಗಡೆಯಾದಳೆಂದರೆ, ಇದಕ್ಕೆ ತನ್ನ ವೈಯಕ್ತಿಕ, ವ್ಯಕ್ತಿವಿಶಿಷ್ಟ ಗುಣಗಳಾದ ಕಠಿಣ ಪರಿಶ್ರಮ ಮತ್ತು ಬದ್ಧತೆಗಳೇ ಕಾರಣವೆಂದು ಆಕೆ ನಂಬುತ್ತಾಳೆ. ಅಧ್ಯಯನ ವಿಷಯಗಳು ತನಗೆ ಆಸಕ್ತಿದಾಯಕವಾಗಿದ್ದು, ಓದಿನ ಮೇಲಿನ ತನ್ನ ಒಲವು ಸಹ ತಾನು ಉತ್ತಮ ರೀತಿಯಲ್ಲಿ ತೇರ್ಗಡೆಯಾಗಲು ಕಾರಣವೆಂದು ಕೂಡ ಆಕೆ ಹೇಳಬಹುದು. ಇಷ್ಟಾದರೂ ಸಮಾಜಶಾಸ್ತ್ರಜ್ಞರು ಆಕೆಗೆ ತೋಚಿರದ ಮತ್ತಷ್ಟು ವಿವರಣೆಗಳನ್ನು ಸೇರಿಸಬಲ್ಲರು. ಸಮಾಜಶಾಸ್ತ್ರಜ್ಞರು ಆಕೆಯು ಶಿಕ್ಷಣದ ಮಹತ್ವವನ್ನು ಅರ್ಥ ಮಾಡಿಕೊಂಡಿರುವ ಕೌಟುಂಬಿಕ ಮತ್ತು ಸಾಮಾಜಿಕ ಹಿನ್ನಲೆಯಿಂದ ಬಂದವಳಾಗಿದ್ದು, ಇಂತಹ ಕುಟುಂಬಗಳು ಹುಡುಗರ ಶಿಕ್ಷಣಕ್ಕೆ ಮಾತ್ರವಲ್ಲ, ಹುಡುಗಿಯರ ಶಿಕ್ಷಣಕ್ಕೂ ಬೆಂಬಲ ನೀಡುತ್ತವೆ ಎಂದು ಗುರುತಿಸಬಲ್ಲರು. ಆಕೆಯ

ಕುಟುಂಬದ ಬೆಂಬಲವೇ ಆಕೆ ಶಾಲೆಗೆ ಹೋಗಿ ಉತ್ತಮವಾದ ಶಿಕ್ಷಣವನ್ನು ಪಡೆಯುವುದನ್ನು ಸಾಧ್ಯವಾಗಿಸಿರಬಹುದು. ಈ ಕುಟುಂಬವು ಸಾಂಪ್ರದಾಯಿಕ ಚಟುವಟಿಕೆಗಳು ಮತ್ತು ಮನೆಯ ಕೆಲಸಗಳಿಂದ ಆಕೆಯನ್ನು ದೂರವಿಟ್ಟು, ಆಕೆಯು ತನ್ನ ಶಿಕ್ಷಣದ ಮೇಲೆಯೇ ಸಂಪೂರ್ಣವಾದ ಗಮನವನ್ನು ಹರಿಸುವಂತೆ ಮಾಡಿರಬಹುದು. ಆಕೆಯ ಕುಟುಂಬ ಏಕೆ ಹೀಗಿದೆ ಮತ್ತು ಭಾರತದ ಇತರ ಅನೇಕ ಕುಟುಂಬಗಳಂತೆ ಏಕಿಲ್ಲ? ಭಾರತವು ಅಭಿವೃದ್ಧಿಯಾದಂತೆ ಆಕೆಯ ಕುಟುಂಬದ ಸ್ಥಾನವು ಎಲ್ಲಿತ್ತು ಎನ್ನುವುದನ್ನು ಸೇರಿದಂತೆ ಆಕೆಯ ಕುಟುಂಬ ವರ್ಗದ ಹಿನ್ನಲೆ, ಆಕೆಯ ಧರ್ಮ ಮತ್ತು ಜಾತಿಯ ಸಂಸ್ಕೃತಿ, ಆಕೆ ಸುತ್ತಮುತ್ತಲಿರುವ -ಕುಟುಂಬದ ಕೆಲಸದಿಂದಾಚೆಗಿನ- ವೃತ್ತಿಪರ ಮಹಿಳೆಯರ ಉದಾಹರಣೆಗಳು, ತನ್ನ ಶಾಲೆ ಮತ್ತು ಸಮುದಾಯದಲ್ಲಿ ಓರ್ವ ಮಹಿಳೆಯಾಗಿರುವುದು ಎಂದರೇನು? ಇವೇ ಮುಂತಾದ ಇನ್ನಿತರ ಸಮಾಜಶಾಸ್ತ್ರೀಯ ಪ್ರಕ್ರಿಯೆಗಳ ಚರ್ಚೆ ಮತ್ತು ವಾಗ್ವಾದಗಳನ್ನು ಸಮಾಜಶಾಸ್ತ್ರಜ್ಞರು, ಪತ್ತೆ ಹಚ್ಚುತ್ತಾರೆ.

ಆಕೆ ಗ್ರಹಿಕೆಯಲ್ಲಿ ಸಮರ್ಥಳು, ಅಪೌಷ್ಠಿಕತೆ ಇಲ್ಲದವಳು, ಮಾನಸಿಕವಾಗಿ ಅಸಮರ್ಥಳಲ್ಲ ಎನ್ನುವ ಜೈವಿಕ ಅಡಿಪಾಯದ ಮೇಲೆ ಬೋರ್ಡ್ ಪರೀಕ್ಷೆಯಲ್ಲಿ ಆಕೆಯ ಅತ್ಯುತ್ತಮ ಶ್ರೇಣಿಯ ತೇರ್ಗಡೆಯು ನಿಂತಿದೆ. ಆದರೆ ಆಕೆಯ ಜೈವಿಕ ಸಾಮರ್ಥ್ಯಗಳು ಬೆಳವಣಿಗೆ ಆಗುತ್ತಿವೆಯೇ ಇಲ್ಲವೇ ಎಂಬುದು ಆಕೆ ಬೆಳೆಯುತ್ತಿರುವ ಸಾಮಾಜಿಕ ಪರಿಸರ, ಆಕೆಯ ಕಠಿಣ ಪರಿಶ್ರಮ ಹಾಗೂ ಆಕೆಯ ಪಾಲ್ಗೊಳ್ಳುವಿಕೆಗಳನ್ನು ಅವಲಂಬಿಸಿದೆ. ಆಕೆಯ ವ್ಯಕ್ತಿಗತ ಮತ್ತು ಜೀವಶಾಸ್ತ್ರೀಯ ವಿಶಿಷ್ಟತೆಗಳಿಗಿಂತಲೂ ಪ್ರತ್ಯೇಕವಾಗಿ ಆಕೆಯ ಜೀವನ ಮತ್ತು ಸಾಧನೆಗಳ ಸಮಾಜಶಾಸ್ತ್ರೀಯ ಆಯಾಮಕ್ಕೆ ವಿಶೇಷ ಗಮನ ನೀಡಬೇಕಾದ ಅಗತ್ಯವಿದೆ.

ಶೈಕ್ಷಣಿಕ ಸಾಧನೆಗಳು ಮತ್ತು ಕಲಿಕೆಗಳು ವೈಯಕ್ತಿಕವಾದ ಸಂಗತಿಯಾಗಿವೆ ಎಂಬ ಸಾಮಾನ್ಯವಾಗಿ ಜನಜನಿತವಾಗಿರುವ ನಂಬಿಕೆ ಅಪೂರ್ಣವಾದದ್ದು ಎಂದು ಸಮಾಜಶಾಸ್ತ್ರಜ್ಞರು ಗುರುತಿಸುತ್ತಾರೆ. ಇಲ್ಲಿ ಸಮಾಜವು ಗಮನಾರ್ಹವಾದ ಪಾತ್ರವನ್ನು ನಿರ್ವಹಿಸುತ್ತದೆ. ವಾಸ್ತವದಲ್ಲಿ 2009-10ರಲ್ಲಿ ಭಾರತದಲ್ಲಿ ಕೇವಲ 17% ಯುವ ವಿದ್ಯಾರ್ಥಿಗಳು ಮಾತ್ರ ತಮ್ಮ ಪ್ರೌಢಶಾಲಾ ಶಿಕ್ಷಣದ ನಂತರದ ಉನ್ನತ ಶಿಕ್ಷಣಕ್ಕೆ ನೋಂದಾಯಿಸಿಕೊಂಡಿದ್ದರು. ಇದರರ್ಥ ಐದರಲ್ಲಿ ಒಬ್ಬರಿಗಿಂತ ಕಡಿಮೆ ಭಾರತೀಯರು ಉನ್ನತ ಶಿಕ್ಷಣವನ್ನು ಪಡೆಯುತ್ತಾರೆ. ಉಳಿದ ಬಹುಪಾಲು ವಿದ್ಯಾರ್ಥಿಗಳು ಉನ್ನತ ಶಿಕ್ಷಣದಿಂದ ದೂರ ಉಳಿದದ್ದು ತಮ್ಮ ವೈಯಕ್ತಿಕ ನಿರ್ಧಾರದಿಂದಲ್ಲ ಅಥವಾ ಜೈವಿಕವಾದ ಬುದ್ಧಿಶಕ್ತಿ ಇಲ್ಲದಿರುವಿಕೆಯ ಕಾರಣದಿಂದಲ್ಲ. ಅಂದರೆ ಇದಕ್ಕೆ ಪ್ರಾಥಮಿಕ ಕಾರಣ ಜೈವಿಕವಾದುದಾಗಲಿ, ವ್ಯಕ್ತಿಗತವಾದುದಾಗಲಿ ಅಲ್ಲ. ಬದಲಾಗಿ ಅವರ ಕುಟುಂಬಗಳಿಗೆ ಅವರ ಶಿಕ್ಷಣವನ್ನು ಬೆಂಬಲಿಸಲು ಸಾಧ್ಯವಾಗಲಿಲ್ಲ ಅಥವಾ ಅವರು ವಾಸಿಸುತ್ತಿದ್ದ ಪರಿಸರದಲ್ಲಿ ಲಭ್ಯವಿದ್ದ ಶಾಲಾ ಕಲಿಕೆಯಿಂದ ಸ್ಥಳೀಯ ಪರಿಸರದಲ್ಲಿ ಜೀವನೋಪಾಯದ ಮಾರ್ಗ ಕಂಡುಕೊಳ್ಳುವ ಸಾಧ್ಯತೆಗಳು ಅವರಿಗೆ ಕಾಣಿಸಲಿಲ್ಲ. ಅಥವಾ ಹುಡುಗಿಯರಿಗೆ ಅಷ್ಟೊಂದು ಶಿಕ್ಷಣದ ಅವಶ್ಯಕತೆಯಿಲ್ಲ ಎಂದು ಅವರಿಗೆ ಅನ್ನಿಸಿದ್ದಿರಬಹುದು. ಇವೆಲ್ಲವೂ ಶುದ್ಧ ವೈಯಕ್ತಿಕ ಆಯ್ಕೆಗಳಲ್ಲ; ಬದಲಾಗಿ, ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮ ವಿವಿಧ ಭಾಗಗಳನ್ನು ರೂಪಿಸಿರುವ ರೀತಿಗಳಿಂದ ಹಾಗೂ ವಿವಿಧ ಸಮುದಾಯಗಳ ಮತ್ತು ವರ್ಗಗಳ ಇತಿಹಾಸದಿಂದ ಇವು ರೂಪಿತವಾಗುತ್ತವೆ. ದೊಡ್ಡ ವಾಣಿಜ್ಯ ಮತ್ತು ಸರ್ಕಾರಿ ಸಂಸ್ಥೆಗಳಿರುವ ನಗರಗಳಲ್ಲಿನ, ಇಂಗ್ಲಿಷ್ ಮಾತನಾಡುವ ಕುಟುಂಬಗಳಲ್ಲಿ ಜನಿಸಿದ ಮಗುವಿಗೆ ಕಾಲೇಜು ಶಿಕ್ಷಣದ ಸಾಧ್ಯತೆ ಬಹುತೇಕ ಖಚಿತವಾಗಿರುತ್ತದೆ. ಆದರೆ ಒಬ್ಬ ಕೃಷಿ ಕಾರ್ಮಿಕನ ಮಗು ಒಂದು ಸಾಧಾರಣವಾದ ಕಾಲೇಜಿಗೆ ಸೇರಲೂ ಹೆಚ್ಚಿನ ಪರಿಶ್ರಮ ಮತ್ತು ವಿಶೇಷ ಬದ್ಧತೆಗಳನ್ನು ತೋರಿಸಬೇಕಾಗುವುದು.

ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದಾಗಿ ವಿವಿಧ ಪ್ರಶ್ನೆಗಳಿಗೆ ಉತ್ತಮವೆನಿಸುವ ಉತ್ತರಗಳನ್ನು ಪಡೆಯಲು ನಮಗೆ ಸಹಾಯಕವಾಗಿದೆ. ಆದಾಗ್ಯೂ ಇದು ಸಮಾಜದಲ್ಲಿ ಶಿಕ್ಷಣದ ಆತ್ಯಂತಿಕ ಗುರಿ ಏನಾಗಿರಬೇಕು ಎನ್ನುವಂತಹ ಮುಖ್ಯವಾದ ಪ್ರಶ್ನೆಗಳಿಗೆ ಸಂಪೂರ್ಣವಾದ ಉತ್ತರವನ್ನು ಕೊಡುವುದಿಲ್ಲ. ಏಕೆಂದರೆ ಈ ಪ್ರಶ್ನೆಗಳಿಗೆ ಸಮಾಜಶಾಸ್ತ್ರವಷ್ಟೇ ಅಲ್ಲ; ತತ್ತ್ವಶಾಸ್ತ್ರ ಮತ್ತು ಮನಶಾಸ್ತ್ರವೂ ಸೇರಿದಂತೆ ಹಲವು ಮೂಲಗಳಿಂದ ಸಿಗುವ ಉತ್ತರಗಳ ಅಗತ್ಯವಿದೆ. ಇಷ್ಟಾದರೂ, ಚಿತ್ರಬಂಧದ ಒಗಟಿನ ಆಟವನ್ನು ಹೋಲುವ ಇಂತಹ ಅನೇಕ ಪ್ರಶ್ನೆಗಳ ಪರಿಹಾರಕ್ಕೆ ಸಮಾಜಶಾಸ್ತ್ರವು ಆಗಿಂದಾಗ್ಗೆ ತನ್ನ ಕೊಡುಗೆ ನೀಡುತ್ತಲೇ ಬಂದಿದೆ.

**ಶಾಲೆಯಲ್ಲಿ ಯಾರು ಉತ್ತಮವಾಗಿ ಕಲಿಯುತ್ತಾರೆ?**

ಪ್ರತಿ ಶಾಲಾ ತರಗತಿಯಲ್ಲೂ ಕೆಲವು ಮಕ್ಕಳು ತ್ವರಿತವಾಗಿ ಕಲಿಯುತ್ತಾರೆ, ಮತ್ತೆ ಕೆಲವು ಮಕ್ಕಳು ನಿಧಾನವಾಗಿ ಕಲಿಯುತ್ತಾರೆ. ಶೀಘ್ರವಾಗಿ ಕಲಿಯುವ ಮಕ್ಕಳು ಉಳಿದವರಿಗಿಂತ ಚುರುಕು ಬುದ್ಧಿಯವರು ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಆದರೆ ಸಮಾಜಶಾಸ್ತ್ರ ಇದನ್ನು ಒಪ್ಪುವುದಿಲ್ಲ. 'ನಿಧಾನವಾಗಿ ಕಲಿಯುವ' ವಿದ್ಯಾರ್ಥಿನಿಯನ್ನು ಆಕೆಗೆ ಹೆಚ್ಚು ಮುತುವರ್ಜಿ ಮತ್ತು ಬೆಂಬಲ ದೊರೆಯುವ ಬೇರೊಂದು ತರಹದ ಶಾಲೆಗೆ ಸೇರಿಸಿದಾಗ ಅವಳು ಸಾಮಾನ್ಯವಾಗಿ ಹಿಂದಿಗಿಂತ ಹೆಚ್ಚು ತ್ವರಿತವಾಗಿ ಕಲಿಯತೊಡಗುತ್ತಾಳೆ. ಶಾಲೆಯಲ್ಲಿ ವಿದ್ಯಾರ್ಥಿಯ ಉತ್ತಮವಾದ ಅಥವಾ ಕಳಪೆಯಾದ ಕಲಿಕೆಯು ಆ ವಿದ್ಯಾರ್ಥಿಯ ಸಾಮಾಜಿಕ ಪರಿಸರ, ಸಾಮಾಜಿಕ ಹಿನ್ನೆಲೆ ಮತ್ತು ಶಾಲಾ ವಾತಾವರಣದೊಂದಿಗೆ ಸಂಬಂಧ ಹೊಂದಿರುತ್ತದೆ.

**ಶಿಕ್ಷಣಕ್ಕೆ ಸಂಪನ್ಮೂಲ ಮತ್ತು ಬೆಂಬಲಗಳನ್ನು ಯಾರು ಪಡೆಯುತ್ತಾರೆ ಮತ್ತು ಯಾರು ಪಡೆಯುವುದಿಲ್ಲ?**

ಇಂದಿನ ಭಾರತದಲ್ಲಿ ಮಕ್ಕಳು ಕಡಿಮೆ ಬೋಧನೆ ಇರುವ, ಇಲ್ಲವೇ ಯಾಂತ್ರಿಕವಾಗಿ, ಅಸಂಗತವಾದುದನ್ನು ಬೋಧಿಸುವ ಶಾಲೆಗಳಿಗೆ ಹೋಗುತ್ತಾರೆ. ಇದನ್ನೇ ಶಾಲಾ ಬದುಕಿನ ಅವಿಭಾಜ್ಯ ಅಂಗವೆಂದು ಬಹುತೇಕವಾಗಿ ಕರೆಯಲಾಗುತ್ತದೆ. ಆದರೆ ಅಭಿವೃದ್ಧಿ ಹೊಂದಿದ ದೇಶಗಳು ಸಕಲರಿಗೂ ಅಲ್ಲದಿದ್ದರೂ ಹೆಚ್ಚಿನವರಿಗೆ ಉತ್ತಮವಾದ ಶಿಕ್ಷಣವನ್ನು ನೀಡುವಲ್ಲಿ ಸಾಕಷ್ಟು ಮುಂದುವರಿದಿರುವುದನ್ನು ನಾವು ನೋಡುತ್ತೇವೆ. ಬರೀ ಉತ್ತಮವಾದ ಶಿಕ್ಷಕನನ್ನು ಪಡೆದ ಮಾತ್ರಕ್ಕೆ ಸಮರ್ಥವಾದ ಶಿಕ್ಷಣ ಪ್ರಾಪ್ತಿಯಾಗುವುದಿಲ್ಲ. ಒಂದು ದೇಶದ ರಾಜಕೀಯ ಬೆಳವಣಿಗೆಗಳು, ಆರ್ಥಿಕಾಭಿವೃದ್ಧಿ ಮತ್ತು ಸಾಮಾಜಿಕ ಬೇಡಿಕೆಗಳನ್ನು ಒಳಗೊಂಡಂತೆ ವಿವಿಧ ಸಾಮಾಜಿಕ ಪ್ರಕ್ರಿಯೆಗಳ ಮೂಲಕ ಸಮರ್ಥವಾದ ಶಿಕ್ಷಣ ರೂಪಿತವಾಗುತ್ತದೆ.

**ಒಂದು ಸಮಾಜಕ್ಕೆ ಯಾವ ಪ್ರಕಾರದ ಶಿಕ್ಷಣ ಬೇಕಾಗುತ್ತದೆ?**

ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಕ್ಷೇತ್ರಗಳು ಮಾತ್ರ ಬೆಲೆಯುಳ್ಳ ಉದ್ಯೋಗಗಳು ಎಂದು ಇಂದಿನ ಭಾರತದ ವಿದ್ಯಾರ್ಥಿಗಳಿಗೆ ಕಲಿಸಲಾಗುತ್ತಿದೆ. ಆದರೆ ಕವಿಗಳು, ತತ್ವಜ್ಞಾನಿಗಳು ಅಥವಾ ಮುತ್ಸದ್ದಿಗಳನ್ನು ಹೊಂದಿರದ ಸಮಾಜ ಬಹಳ ಗಂಭೀರವಾದ ಸಮಸ್ಯೆಗಳಿಗೆ ತೆರೆದುಕೊಳ್ಳುತ್ತದೆ. ಕವಿಗಳು, ತತ್ವಜ್ಞಾನಿ ಅಥವಾ ಮುತ್ಸದ್ದಿಗಳಂತಹ ವೃತ್ತಿಗಳಿಗೂ ವಿಶೇಷವಾದ ತರಬೇತಿಯ ಅಗತ್ಯವಿರುತ್ತದೆ. ಅಲ್ಲದೆ ಸಂಕೀರ್ಣವಾದ, ಹಲವು ಸಮುದಾಯಗಳು ಬದುಕುತ್ತಿರುವ ಸಮಾಜದಲ್ಲಿ ಪರಸ್ಪರ ಸಹಕಾರದಿಂದ ಒಟ್ಟಾಗಿ ಬಾಳ್ವೆ ಮಾಡಲು ಅದರಲ್ಲಿನ ಪ್ರತಿಯೊಬ್ಬ ಪ್ರಜೆಗೂ ಸಾಂಸ್ಕೃತಿಕ ಶಿಕ್ಷಣದ ಅವಶ್ಯಕತೆ ಇರುತ್ತದೆ. ಬಹುತೇಕ ಮಾನವ ಇತಿಹಾಸದುದ್ದಕ್ಕೂ ಶಿಕ್ಷಣವನ್ನು ತಾಂತ್ರಿಕ ಕಲಿಕೆಗಿಂತಲೂ ಮಿಗಿಲಾಗಿ ಸಾಂಸ್ಕೃತಿಕ ಕಲಿಕೆ ಎಂದೇ ಅರ್ಥೈಸಿಕೊಂಡು ಬರಲಾಗಿದೆ.

ಕೆಲವು ನಿರ್ದಿಷ್ಟ ಚಾರಿತ್ರಿಕ ಹಾಗೂ ಸಾಮಾಜಿಕ ಸನ್ನಿವೇಶಗಳಲ್ಲಿ ಈ ಅರ್ಥೈಸುವಿಕೆ ಅದಲು ಬದಲುಗೊಂಡಿದ್ದು ಇಂತಹ ಅದಲು ಬದಲಾಗಿರುವಿಕೆಯ ಪ್ರಸ್ತುತತೆಯು ಇಂದಿಗೂ ಚರ್ಚಾರ್ಹ ಸಂಗತಿಯಾಗಿದೆ. ಶಿಕ್ಷಣದ ಗುರಿಯು ಶಾಶ್ವತವಾದ ಮತ್ತು ನಿಶ್ಚಿತವಾದ ಸಂಗತಿಗಳಿಗಿಂತ ಇತಿಹಾಸಕ್ಕೆ ಮತ್ತು ಸಾಮಾಜಿಕ ರಚನೆಗೆ ಸಂಬಂಧಿಸಿದುದ್ದಾಗಿದೆ. ಒಂದು ನಿರ್ದಿಷ್ಟ ಸಮಾಜ ಮತ್ತು ಅದರ ಎಳೆತ ಸೆಳೆತಗಳು ಆ ಸಮಾಜದ ಶಿಕ್ಷಣಕ್ಕೆ ಕಾರ್ಯಸಾಧ್ಯವಾಗಬಲ್ಲ ಗುರಿಗಳನ್ನು ರೂಪಿಸುತ್ತವೆ ಎಂಬ ತಿಳಿವಳಿಕೆ ಇಲ್ಲಿ ಬಹಳ ಮುಖ್ಯವಾದ ಸಂಗತಿಯಾಗಿದೆ.

ಈ ಪುಸ್ತಕದ ಉಳಿದ ಭಾಗವು ಸಮಾಜಶಾಸ್ತ್ರೀಯ ದೃಷ್ಟಿಕೋನವು ಶಿಕ್ಷಣಕ್ಕೆ ಕೊಡಮಾಡುವಂತಹ ಇಂತಹ ಒಳನೋಟಗಳುಳ್ಳ ನಿದರ್ಶನಗಳನ್ನು ವಿವರಿಸಲೆತ್ನಿಸುತ್ತದೆ ಎಂದು ನಾನು ನಂಬಿದ್ದೇನೆ.

**ಸಮಾಜಶಾಸ್ತ್ರವನ್ನು ವ್ಯಾಖ್ಯಾನಿಸುವುದು**

ವ್ಯಾಖ್ಯಾನಗಳ ಪ್ರಯೋಜನ ತೀರಾ ಕಡಿಮೆ. ಅವು ಅದೆಷ್ಟು ಚಿಕ್ಕದಾಗಿ, ಅಡಕವಾಗಿ ಇರುತ್ತವೆಂದರೆ ವಾಸ್ತವವಾಗಿ ವ್ಯಾಖ್ಯಾನಗಳು ನಮಗೆ ಹೆಚ್ಚೇನೂ ಸಹಾಯ ಮಾಡಲಾರವು. ಇದು ಹೇಗೆಂದರೆ 'ಶೋಲೆ' ಎನ್ನುವ ಸಿನಿಮಾ ಡಕಾಯಿತರನ್ನು ಹಿಡಿಯುವ ಕತೆಯಾಗಿದೆ ಎಂದು ಹೇಳಿದಂತೆ. ಈ ವಿವರಣೆಯು ಸಿನಿಮಾ ನೋಡಿದವರಿಗೆ ತೃಪ್ತಿ ನೀಡುವುದಿಲ್ಲ ಮತ್ತು ಸಿನಿಮಾ ನೋಡಿಲ್ಲದವರಿಗೆ ಆ ಸಿನೆಮಾದ ಬಗ್ಗೆ ಹೆಚ್ಚಿಗೆ ಕಲಿಯಲೂ ಆಗುವುದಿಲ್ಲ. ಆದಾಗ್ಯೂ ಮೊದಲಿಗೆ, ಸಮಾಜಶಾಸ್ತ್ರೀಯ ದೃಷ್ಟಿಕೋನ ಎಂದರೇನು ಎನ್ನುವುದನ್ನು ವಿವರಿಸಲೆತ್ನಿಸುವುದು ಒಳ್ಳೆಯದು. ಮುಂದುವರಿದಂತೆ, ಶೋಲೆ ಸಿನಿಮಾ ನೋಡಿದರೆ ಹೇಗೋ ಹಾಗೆ, ಹತ್ತು ಹಲವು ಆಸಕ್ತಿದಾಯಕ ಅಂಶಗಳನ್ನು ಮೂಲ ವ್ಯಾಖ್ಯಾನಕ್ಕೆ ಸೇರಿಸುತ್ತಾ ಸಾಗಬಹುದು.

ಜನರನ್ನು ಅವರ ವೈಯಕ್ತಿಕ ಅಥವಾ ಜೈವಿಕ ಶರೀರದ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳದೆ ಅವರ ಮಾನವ ಪರಿಸರದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವುದು ಸಮಾಜಶಾಸ್ತ್ರೀಯ ದೃಷ್ಟಿಕೋನದ ಮೂಲಭೂತ ಸಂಗತಿಯಾಗಿದೆ. ಅದ್ದರಿಂದ ಹಲವು ವಿಭಿನ್ನ ರೀತಿಯ ಕುಟುಂಬಗಳಿಂದ, ಬದಲಾಗುತ್ತಿರುವ ಆರ್ಥಿಕ ಸನ್ನಿವೇಶಗಳಿಂದ, ಕೋಮುದ್ವೇಷದಿಂದ, ಬದಲಾಗುತ್ತಿರುವ ರಾಜಕೀಯ ಸ್ವರೂಪಗಳಿಂದ, ಇತರರನ್ನು ಹೇಗೆ ಪ್ರೇರೇಪಿಸಬಹುದೆನ್ನುವ ಕುರಿತು ಜನರಿಗಿರುವ ವಿಚಾರಗಳು ಇವೇ ಮುಂತಾದವುಗಳಿಂದ ಶಿಕ್ಷಣ ಹೇಗೆ ಪ್ರಭಾವಿತವಾಗುತ್ತದೆ, ಶಿಕ್ಷಣದಲ್ಲಿ ಏನೆಲ್ಲ ಸಂಭವಿಸುತ್ತದೆ ಎನ್ನುವುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸೋಣ. ಮನುಷ್ಯ ಏಕಾಂಗಿಯಾಗಿ ಬದುಕುವುದಿಲ್ಲ, ಅವನು ಒಂದು ನಿರ್ದಿಷ್ಟ ಸಾಮಾಜಿಕ ರಚನೆಯಲ್ಲಿ ಬಾಳ್ವೆ ಮಾಡುತ್ತಾನೆ ಮತ್ತು ಈ ರಚನೆಯು ಅದರಲ್ಲಿ ಬದುಕುವ ವ್ಯಕ್ತಿಗಳ ಬದುಕಿನ ಮೇಲೆ ಎಲ್ಲ ರೀತಿಯಿಂದಲೂ ಆಳವಾಗಿ ಪ್ರಭಾವಿಸುತ್ತದೆ ಎನ್ನುವುದು ಸಮಾಜಶಾಸ್ತ್ರೀಯ ದೃಷ್ಟಿಕೋನದ ಕೇಂದ್ರ ವಿಚಾರವಾಗಿದೆ. ಇದರರ್ಥ ಮನುಷ್ಯರು ಸಮಾಜದ ತಾಳಕ್ಕೆ ತಕ್ಕಂತೆ ಕುಣಿಯುವ ಸೂತ್ರದ ಗೊಂಬೆಗಳೇನಲ್ಲ. ನಮಗೆ ಆಲೋಚಿಸುವ, ವಿವೇಚಿಸುವ, ಆಯ್ಕೆ ಮಾಡುವ ಸಾಮರ್ಥ್ಯವಿದೆ. ನಾವು ಪ್ರತಿಕ್ರಿಯಿಸುವಾಗ ತಾಳ್ಮೆಯಿಂದ, ಕಾಳಜಿಪೂರ್ವಕವಾಗಿ ಇರಲು ನಿರ್ಧರಿಸಬಹುದು ಇಲ್ಲವೇ ಆದದ್ದಾಗಲಿ ಎಂದುಕೊಂಡು ಕೋಪದಿಂದ ಪ್ರತಿಕ್ರಿಯಿಸಲೂ ನಿರ್ಧರಿಸಬಹುದು. ಈ ಆಯ್ಕೆಗಳು ನಿಶ್ಚಿತವಾದ ಸಾಮಾಜಿಕ ಸನ್ನಿವೇಶದಲ್ಲಿ ನಾವು ಹೇಗೆ ವರ್ತಿಸುತ್ತೇವೆ ಎನ್ನುವುದನ್ನು ಪ್ರಭಾವಿಸುತ್ತವೆ. ಅಂತಹ ಸಾಮಾಜಿಕ ಸನ್ನಿವೇಶ ಮತ್ತು ರಚನೆಯನ್ನು ಬದಲಾಯಿಸುವಂತಹ ಸಂಸ್ಥೆ ಮತ್ತು ಗುಂಪುಗಳನ್ನು

ರೂಪಿಸಿಕೊಳ್ಳಲು ನಾವು ಒಟ್ಟಾಗಲೂಬಹುದು. ಈ ಹಿಂದೆ ನಾವು ಯಾವುದಕ್ಕೆ ತೆರೆದುಕೊಂಡಿದ್ದೆವೋ, ಒಂದು ಸಾಮಾಜಿಕ ರಚನೆಯೊಳಗೆ ನಾವು ಯಾವ ಸ್ಥಾನದಲ್ಲಿ ಇರುತ್ತೇವೋ ಅದು ನಾವು ಮಾಡಿಕೊಳ್ಳುವ ಆಯ್ಕೆಯನ್ನು ಆಳವಾಗಿ ಪ್ರಭಾವಿಸುತ್ತದೆ. ಒಂದು ಕಿಕ್ಕಿರಿದ ತರಗತಿಯಲ್ಲಿ, ಉತ್ತಮ ಶೈಕ್ಷಣಿಕ ತರಬೇತಿಯ ಸಂಸ್ಥೆಯಿಂದ ತರಬೇತಿಗೊಳಗಾಗದ ಶಿಕ್ಷಕನೊಂದಿಗೆ ಗಣಿತವನ್ನು ಉತ್ಸಾಹದಿಂದ ಕಲಿಯಲು ನನಗೆ ಇನ್ನೂ ಹೆಚ್ಚಿನ ಅಡಚಣೆ ಉಂಟಾಗುತ್ತದೆ. ಹೀಗೆ ಸಮಾಜಶಾಸ್ತ್ರವು ವ್ಯಕ್ತಿಗಳು ಮತ್ತು ಸಾಮಾಜಿಕ ರಚನೆಗಳ ನಡುವಿನ ಸಂಕೀರ್ಣ ಅಂತರ್‌ಕ್ರಿಯೆಯ ಅಧ್ಯಯನವಾಗಿದೆ.

ಒಂದು ದೃಷ್ಟಿಯಲ್ಲಿ ಜನ ಯಾವಾಗಲೂ ಸಮಾಜದ ಬಗ್ಗೆ, ಸಮಾಜದಲ್ಲಿ ನಾವು ಏನು ಮಾಡುತ್ತೇವೋ ಅದರ ಮಹತ್ವದ ಬಗೆಗೆ ಅರಿವನ್ನು ಹೊಂದಿರುತ್ತಾರೆ. ಕೌಟಿಲ್ಯನ ಅರ್ಥಶಾಸ್ತ್ರವು ಸಾಮ್ರಾಜ್ಯವು ಸ್ಥಿರವಾಗಿ, ಸದೃಢವಾಗಿ ಇರಬೇಕೆಂದರೆ ಜನರು ಸಂತೋಷದಿಂದ ಇರಬೇಕಾದುದು ಮುಖ್ಯ ಎನ್ನುವುದನ್ನು ಗುರುತಿಸಿತು. ಈ ಗುರುತಿಸುವಿಕೆಯು ಸಮಾಜದ ರಚನೆಯ ಬಗೆಗಿನ ತಿಳಿವಳಿಕೆಯಾಗಿತ್ತು. ಸಮಾಜಶಾಸ್ತ್ರೀಯ ದೃಷ್ಟಿಕೋನವು ಇಂತಹ ಪ್ರಾಚೀನ ಹಾಗೂ ಮೂಲ ತಿಳಿವಳಿಕೆಯ ಇನ್ನೂ ಸುಧಾರಿತವಾದ, ಪರಿಷ್ಕೃತವಾದ ರೂಪವಾಗಿದೆ. ಇದು ತಮ್ಮ ಪಾಲಿಗೆ ಸಂತೋಷವೆಂಬುದರ ಅರ್ಥವೇನು ಎಂದು ಕೇಳಬಲ್ಲ ಜನರನ್ನು ಅಧ್ಯಯನ ಮಾಡುತ್ತದೆ. ಜನರು ಒಂದು ಸರ್ಕಾರವನ್ನು ಬುಡ ಮೇಲಾಗಿಸುವ ಮುನ್ನ ಅಶಾಂತಿಯನ್ನು ಎಷ್ಟರಮಟ್ಟಿಗೆ ತಾಳಿಕೊಳ್ಳಬಲ್ಲರು ಎನ್ನುವುದನ್ನು ಅಧ್ಯಯನ ನಡೆಸುತ್ತದೆ. ಮುಂದುವರಿದು, ರಾಜಪ್ರಭುತ್ವ ಮಾತ್ರವೇ ಏಕೈಕ ಉತ್ತಮವಾದ ಮಾದರಿಯೇ? ಬೇರೆ ರೀತಿಯ ಸಮಾಜಗಳ ಮತ್ತು ಅದರ ಸರ್ಕಾರಗಳ ಗುಣಲಕ್ಷಣಗಳೇನು? ಮುಂತಾದವುಗಳನ್ನು ಇದು ಪರಿಶೀಲಿಸುತ್ತದೆ. ಸಮಾಜಶಾಸ್ತ್ರವು, ಬರೀ ಸಹಜ ಜ್ಞಾನದ ಚರ್ಚೆಯನ್ನಷ್ಟೇ ಮಾಡುವುದಿಲ್ಲ, ಅದು ಹಲವು ರೀತಿಯ ಸಮಾಜಗಳನ್ನು ವ್ಯವಸ್ಥಿತವಾಗಿ ಅಧ್ಯಯನ ನಡೆಸುತ್ತದೆ.

**ಸಮಾಜಶಾಸ್ತ್ರ ಮತ್ತು ಸಾಮಾನ್ಯ ಪ್ರಜ್ಞೆ**

ಇಂದು ಸಮಾಜಶಾಸ್ತ್ರಕ್ಕೆ ಬೇಡಿಕೆ ಇದ್ದು, ಜನರು ಅದರ ಒಳನೋಟಗಳನ್ನು ನಿರೀಕ್ಷಿಸುತ್ತಿದ್ದಾರೆ, ಇದಕ್ಕೆ ಜೀವನವು ಹೆಚ್ಚು ಹೆಚ್ಚು ಜಟಿಲವಾಗುತ್ತಿರುವುದು ಒಂದು ಕಾರಣವಾಗಿದೆ. ನನ್ನದೇ ಸ್ವಂತ ಅನುಭವವು, ಸಾಮಾನ್ಯವಾಗಿ ನನ್ನ ನೆರೆಹೊರೆ, ಕುಟುಂಬ ಮತ್ತು ಸ್ನೇಹಿತರಿಂದಲೇ ಬಂದಿರುತ್ತದೆ. ಹೆಚ್ಚೆಂದರೆ ಇದು ಕೆಲವು ನೂರು ಜನರ ಗಡಿಯನ್ನು ದಾಟಿ ಹೋಗುವುದಿಲ್ಲ. ಈಗ ನನ್ನ ಅನುಭವದ ಪರಿಧಿಯಿಂದ ಬಹಳ ದೂರದ ಅನೇಕ ಸಂಗತಿಗಳು ನನ್ನ ಜೀವನದ ಮೇಲೆ ಪ್ರಭಾವ ಬೀರುತ್ತಿವೆ. ಉದಾಹರಣೆಗೆ, 2008ರಲ್ಲಿ ಅಮೆರಿಕನ್ ಗೃಹ ಸಾಲ ಕಂಪನಿಗಳು ಮತ್ತು ಬ್ಯಾಂಕ್‌ಗಳು ವಿಪರೀತ ದುರಾಸೆ ಬೆಳೆಸಿಕೊಂಡುದರ ಫಲವಾಗಿ ಅಮೆರಿಕದ ಅರ್ಥವ್ಯವಸ್ಥೆಯಲ್ಲಿ ಕುಸಿತ ಉಂಟಾಯಿತು. ಈ ಆಘಾತವು ಜಗತ್ತಿನ ಎಲ್ಲ ಕಡೆ ಹಬ್ಬಿ ಹಲವಾರು ಮಂದಿ ತಮ್ಮ ಉದ್ಯೋಗ ಮತ್ತು ವ್ಯಾಪಾರ ವ್ಯವಹಾರಗಳನ್ನು ಕಳೆದುಕೊಂಡರು. ಇವರಲ್ಲಿ ನನ್ನ ಬೆಂಗಳೂರಿನ ಗೆಳೆಯ ಸಲೀಂ ಕೂಡ ಒಬ್ಬ. ಆತ ಆದಾಯವಿಲ್ಲದೆ ಮನೆಯಲ್ಲೇ ಕೂರಬೇಕಾಯಿತು. ಇದು ಅವನಿಗೆ ಕಠಿಣ ಸಮಯವಾಗಿತ್ತು. ಈ ಖಿನ್ನತೆಯಿಂದ ಹೇಗೋ ಯಶಸ್ವಿಯಾಗಿ ಹೊರ ಬಂದುದೇ ಅವನ ಹೆಗ್ಗಳಿಕೆಯಾಯಿತು. ಆದರೆ ಈ ಕುಸಿತಕ್ಕೆ ಆತ ಹೊಣೆಯಲ್ಲ. ಇದೆಲ್ಲ ಇನ್ನೂ ವ್ಯಾಪಕವಾದ ಪ್ರಕ್ರಿಯೆಗಳಾಗಿದ್ದು ಇದರ ಪರಿಣಾಮ ಅವನ ಜೀವನವನ್ನೂ ಸ್ಪರ್ಶಿಸುತ್ತಿತ್ತು. ಜನರು ನೀರ್ಗುಳ್ಳೆಯಂತಹ ತಮ್ಮ ಸಣ್ಣಪುಟ್ಟ ಅನುಭವಗಳಿಂದ ಈ ಘಟನೆಯನ್ನು ನೋಡಿದ್ದರೆ, ಉದ್ಯೋಗ

ಕಳೆದುಕೊಂಡುದಕ್ಕೆ ಅವರು ಸಲೀಂನನ್ನೇ ದೂಷಿಸುತ್ತಿದ್ದರು. ಸಲೀಂನ ಜೀವನ ನಾಟಕವು ಅದಕ್ಕಿಂತಲೂ ಮಿಗಿಲಾದ ಬೃಹನ್ನಾಟಕವೊಂದರ ಒಂದು ಪುಟ್ಟ ಅಂಕವಾಗಿದೆ ಎಂಬುದರ ಕಡೆಗೆ ಜನ ಗಮನಹರಿಸಲಾರಂಭಿಸಿದ ಮೇಲೆ ಅವನಿಗೆ ಬದುಕಿನಲ್ಲಿ ಏನಾಯಿತು ಎನ್ನುವುದರ ವಾಸ್ತವಿಕ ಚಿತ್ರಣವನ್ನು ಪಡೆಯಲು ಅವರಿಗೆ ಸಾಧ್ಯವಾಯಿತು.

ಅದೇ ರೀತಿ, ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ನಗರದ ಶಾಲೆಗಳಿಗೆ ಪ್ರವೇಶ ಪಡೆಯಲು ಎದುರಿಸುವ ಕಷ್ಟಗಳನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನವನ್ನು ಪರಿಗಣಿಸಿ ನೋಡಿದಾಗ ಅದನ್ನು ಭಿನ್ನವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಇಂತಹ ಶಾಲೆಗಳಿಗೆ ಬರುವ ಒಬ್ಬ ಶಿಕ್ಷಕನ ದೃಷ್ಟಿಕೋನದಿಂದ ನೋಡಿದಾಗ ಈ ವಿದ್ಯಾರ್ಥಿಗಳಿಗೆ ತಮ್ಮ ಪಾಠವನ್ನು ಗ್ರಹಿಸಲಾಗುತ್ತಿಲ್ಲ ಅಥವಾ ಕಲಿಯುವಲ್ಲಿ ಅವರಿಗೆ ಆಸಕ್ತಿ ಇಲ್ಲ ಎನ್ನುವಂತೆ ಅವರಿಗೆ ತೋರಬಹುದು. ಆದರೆ ಸಮಾಜಶಾಸ್ತ್ರಜ್ಞರ ಪ್ರಕಾರ ಭಾರತೀಯ ಶಾಲೆಗಳಲ್ಲಿ ಶಿಕ್ಷಣದ ಪಠ್ಯಕ್ರಮ, ಬೋಧನೆಯ ವಿಧಾನ, ಪಠ್ಯ ಪುಸ್ತಕಗಳು ಮತ್ತು ಶಿಕ್ಷಕರು ಹೀಗೆ ಎಲ್ಲ ಸಂಗತಿಗಳ ಆಶಯವು ನಗರಗಳಲ್ಲಿ 'ಬಿಳಿ ಕಾಲರ್'[1] ವೃತ್ತಿಯನ್ನು ಗಿಟ್ಟಿಸಿಕೊಳ್ಳುವುದರ ಮೇಲೆ ಕೇಂದ್ರೀಕೃತವಾಗಿರುತ್ತವೆ. ಇಂತಹ ಶಾಲೆಗಳು ಈಗಾಗಲೇ ಇಂತಹ ವೃತ್ತಿಯಲ್ಲಿರುವ ಕುಟುಂಬಗಳಿಂದ ಬಂದ ಮಕ್ಕಳಿಗೆ ಹೆಚ್ಚು ಸೂಕ್ತವೆನ್ನಿಸುವಂತಹ ವಾತಾವರಣವನ್ನು ಸೃಷ್ಟಿಸುತ್ತವೆ. ಬೇರೆ ಇತರ ಸಾಮಾಜಿಕ ಹಿನ್ನಲೆಯಿಂದ ಬಂದ ವಿದ್ಯಾರ್ಥಿಗಳಲ್ಲಿ ಅಪರಿಚಿತತೆ ಮತ್ತು ಪರಕೀಯ ಪ್ರಜ್ಞೆಯನ್ನು ಮೂಡಿಸುತ್ತವೆ. ಈ ತಿಳಿವಳಿಕೆಯು, ಗ್ರಾಮೀಣ ಹಿನ್ನೆಲೆಯ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಯನ್ನು ನೋಡುವ ದೃಷ್ಟಿಕೋನವನ್ನು ಬದಲಾಯಿಸುತ್ತದೆ. ಇದು ಒಂದು ಸಾಮಾಜಿಕ ವ್ಯವಸ್ಥೆಯ ಇನ್ನೂ ಹಿರಿದಾದ ಸಮಸ್ಯೆಯಾಗಿದ್ದು ಇದಕ್ಕೆ ಕೇವಲ ಅಂಥ ವಿದ್ಯಾರ್ಥಿಗಳನ್ನು ದೂಷಿಸಲು ಸಾಧ್ಯವಿಲ್ಲ.

ಸಮಾಜಶಾಸ್ತ್ರದ ಅಧ್ಯಯನದಿಂದ ಅನೇಕ ವಿಚಾರಗಳ ಬಗ್ಗೆ ಇರುವ ನಮ್ಮ ಸಾಮಾನ್ಯ ತಿಳಿವಳಿಕೆ ಬದಲಾಗಿದೆ. ನಮಗೆ ಪರಿಚಿತವಾದ ಮತ್ತು ಮಾಧ್ಯಮಗಳಂತಹ ಆಕರಗಳಿಂದ ದೊರಕುವ ತಿಳಿವಳಿಕೆಯಿಂದ ನಮ್ಮ ಸಾಮಾನ್ಯ ತಿಳಿವಳಿಕೆಯು ರೂಪುಗೊಳ್ಳುತ್ತದೆ. ಸಮಾಜಶಾಸ್ತ್ರವಾದರೂ ವಿಜ್ಞಾನದ ಮೂಲಭೂತ ದೃಷ್ಟಿಕೋನಗಳಿಂದ ಮತ್ತು ಯಾವುದನ್ನು ಅರ್ಥಮಾಡಿಕೊಳ್ಳಬೇಕೋ ಅದನ್ನು ವ್ಯವಸ್ಥಿತ ವಿಧಾನಗಳ ಮೂಲಕ ತಿಳಿದುಕೊಳ್ಳುತ್ತದೆ. ಇದಕ್ಕೆ ತಾನು ಬಳಸುವ ವಿಧಾನಗಳ ಬಗೆಗೂ ಅರಿವು ಹೊಂದಿರುತ್ತದೆ ಮತ್ತು ಇದು ಅಭಿವೃದ್ಧಿಪಡಿಸುವ ಜ್ಞಾನವನ್ನು ಅರ್ಥ ಮಾಡಿಕೊಳ್ಳಲು ಸಾಕ್ಷ್ಯಾಧಾರಗಳು ಅತಿ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ.

ಉದಾಹರಣೆಗೆ, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ(ಐಐಟಿ)ಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ (ಎಸ್ಸಿ ಮತ್ತು ಎಸ್ಟಿ) ವಿದ್ಯಾರ್ಥಿಗಳನ್ನು ಕೇವಲವಾಗಿ ನಡೆಸಿಕೊಳ್ಳಲಾಗುತ್ತದೆ ಎನ್ನುವುದನ್ನು ಮತ್ತೆ ಮತ್ತೆ ಕೇಳುತ್ತಿರುತ್ತೇವೆ. ಎಸ್. ಶ್ರೀನಿವಾಸ್ ರಾವ್ ಎನ್ನುವವರು ಇದು ಸತ್ಯವೇ ಮತ್ತು ಇದು ಸತ್ಯವಾಗಿದ್ದರೆ ಇದು ಹೇಗೆ ನಡೆಯುತ್ತದೆ ಎನ್ನುವುದನ್ನು ಪರೀಕ್ಷಿಸಲು ಬಯಸಿದರು. ಇದಕ್ಕೆ ಅವರು 2005-6ರಲ್ಲಿ ಒಂದು ಐಐಟಿಯನ್ನು ಅಧ್ಯಯನಕ್ಕೆ ಒಳಪಡಿಸಿದರು. ಇದಕ್ಕೆ ಅವರು ವಿದ್ಯಾರ್ಥಿಗಳನ್ನು, ಅಧ್ಯಾಪಕರನ್ನು ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಸಂದರ್ಶಿಸಿದರು (ರಾವ್ 2013). ಈ ಸಂದರ್ಶನ ಮತ್ತು ತಮ್ಮ ಅವಲೋಕನದ ಆಧಾರದಲ್ಲಿ ಎಸ್ಸಿ

---

[1] ಕಛೇರಿಯಲ್ಲಿ ಕೆಲಸ ಮಾಡುವ ಅಥವಾ ಬ್ಯಾಂಕ್ ಗಳಲ್ಲಿ ಅಥವಾ ವಕೀಲರಂತಹ ವೃತ್ತಿಪರ ವೃತ್ತಿಯನ್ನು ಹೊಂದಿರುವ ವ್ಯಕ್ತಿಗಳನ್ನು 'ಬಿಳಿ ಕಾಲರ್' ವೃತ್ತಿಮಾಡುವವರು ಎಂದು ಗುರುತಿಸಲಾಗುವುದು.

ಮತ್ತು ಎಸ್ಟಿ ವಿದ್ಯಾರ್ಥಿಗಳಿಗೆ ಹಣೆಪಟ್ಟಿಯನ್ನು ಹಚ್ಚುವಂತಹ ಕೆಲವು ನಿರ್ದಿಷ್ಟ ಪ್ರಕ್ರಿಯೆಗಳನ್ನು ಗುರುತಿಸಿದರು. ಈ ಹಣೆಪಟ್ಟಿಗಳೇ ಕೆಲವಾರು ವ್ಯಕ್ತಿಗಳ ತಾರತಮ್ಯದ ವರ್ತನೆಗೆ ಕಾರಣವಾಯಿತು ಎಂದು ಗುರುತಿಸಿದರು. ಉದಾಹರಣೆಗೆ, ಐಐಟಿ-ಜೆಇಇ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಎಸ್ಸಿ ಮತ್ತು ಎಸ್ಟಿ ವಿದ್ಯಾರ್ಥಿಗಳಿಗೆ ಒಂದು ವರ್ಷದ ಪೂರ್ವ ಸಿದ್ಧತಾ ಕೋರ್ಸ್(Preparatory Course- PC)ಗೆ ಸೇರುವ ಅವಕಾಶವನ್ನು ಕಲ್ಪಿಸಲಾಯಿತು. 'ಪಿಸಿ' ಎನ್ನುವ ಪದವು ಕ್ರಮೇಣ ಐಐಟಿಯಲ್ಲಿ ಗೇಲಿ ಮಾಡಲು ಬಳಸಲಾಗುವ ಪದವಾಗಿಬಿಟ್ಟಿತು. ಇದು ವಿದ್ಯಾರ್ಥಿಗಳಲ್ಲಿ ತಮ್ಮ ಬಗೆಗೆ ಯೋಚಿಸುವ ಕ್ರಮದ ಮೇಲೆ ಮತ್ತು ಇತರರೊಂದಿಗಿನ ಸಂಬಂಧದ ಮೇಲೆ ಕೆಟ್ಟ ಪರಿಣಾಮವನ್ನು ಉಂಟುಮಾಡಿತು. ರಾವ್ ಅವರ ಬಳಿ ವಿದ್ಯಾರ್ಥಿಯೊಬ್ಬ ಹೇಳಿದಂತೆ:

"ಅದು ನಮ್ಮ ಭೌತಶಾಸ್ತ್ರದ ತರಗತಿ ಮತ್ತು ನಾವು ನಮ್ಮ ಅಧ್ಯಾಪಕರನ್ನು ಮೊದಲ ಬಾರಿಗೆ ಸಂಧಿಸುತ್ತಿದ್ದೆವು. ಪಾಠದ ನಂತರ ಅವರು ನಮಗೆ ಏನಾದರೂ ಅನುಮಾನಗಳಿದ್ದರೆ ಕೇಳಲು ಹೇಳಿದರು. ನಾನು ಒಂದು ಪ್ರಶ್ನೆಯನ್ನು ಕೇಳಿದೆ. ಅದಕ್ಕೆ ಅಧ್ಯಾಪಕರು ನೇರವಾಗಿ ಉತ್ತರಿಸುವುದನ್ನು ಬಿಟ್ಟು ನನಗೇ ಮರುಪ್ರಶ್ನೆಯನ್ನು ಹಾಕಿದರು. "ನಿನಗೆ ಇಷ್ಟೂ ತಿಳಿದಿಲ್ಲವೇ? ನೀನೂ ಪಿಸಿ ವಿದ್ಯಾರ್ಥಿಯೇ?" ಎಂದು ಕೇಳಿದರು. ನನ್ನ ಮನಸ್ಸು ಕುಗ್ಗಿತು, ಅವಮಾನವಾದಂತಾಯಿತು. ಅದು ನನ್ನ ಮೊದಲ ತರಗತಿ, ನನ್ನ ಸಹಪಾಠಿಗಳು ನನ್ನ ಬಗೆಗೆ ಎಂಥಹ ಚಿತ್ರಣ ಮೂಡಿಸಿಕೊಳ್ಳಬಹುದು ಎಂದು ನೀವೇ ಊಹಿಸಿ! ಇದಾದ ಮೇಲೆ ನಾನು ಅವರ ತರಗತಿಗಳನ್ನು ಮಾತ್ರವಲ್ಲ, ಭೌತಶಾಸ್ತ್ರವನ್ನೇ ದ್ವೇಷಿಸಲಾರಂಭಿಸಿದೆ. ಈಗ ನನಗೆ ಇಂಜಿನಿಯರ್ ಆಗುವುದು ಬೇಡವಾಗಿದೆ. ನಾನು ಬೇರೆ ಕೋರ್ಸಿಗೆ ಹೋಗಬೇಕೆಂದಿದ್ದೇನೆ." (Rao 2013: 210)

ಐಐಟಿಯ ಬಗೆಗೆ ಹೇಳಲು ರಾವ್ ಅವರಲ್ಲಿ ಇನ್ನೂ ಅನೇಕ ಸಂಗತಿಗಳಿವೆ. ಆದರೆ ಪ್ರಸ್ತುತ ಸಂಗತಿಯೇ ಅವರ ಅಧ್ಯಯನದ ದೃಷ್ಟಿಕೋನವನ್ನು ತಿಳಿದುಕೊಳ್ಳಲು ಸಾಕಾಗುತ್ತದೆ. ವಿದ್ಯಾರ್ಥಿಗಳಿಗೆ ಹಣೆಪಟ್ಟಿ ಹಚ್ಚುವುದರ ಪರಿಣಾಮವನ್ನು ಅರ್ಥಮಾಡಿಕೊಳ್ಳಲು ನೆರವಾಗಬಲ್ಲ ಸೈದ್ಧಾಂತಿಕ ಸಾಮಗ್ರಿಗಳನ್ನು ಅಧ್ಯಯನ ಮಾಡಿದರು. ಅವರು ಕೇವಲ ತಮ್ಮ ಪುಸ್ತಕದ ಓದನ್ನು ಅಥವಾ ಹಿಂದಿನ ತಿಳಿವಳಿಕೆಯನ್ನು ಆಧರಿಸಿ ತೀರ್ಮಾನಕ್ಕೆ ಬರಲಿಲ್ಲ. ಬದಲಾಗಿ, ವಾಸ್ತವಿಕವಾದ ನೆಲೆಯಲ್ಲಿ ಐಐಟಿಯಲ್ಲಿಯ ವಿದ್ಯಾರ್ಥಿ ಮತ್ತು ಶಿಕ್ಷಕರನ್ನು ವ್ಯವಸ್ಥಿತವಾಗಿ ಅಧ್ಯಯನಕ್ಕೆ ಒಳಪಡಿಸಿದರು. ವಾಸ್ತವಿಕ ಅಧ್ಯಯನಕ್ಕೆ ಮಹತ್ವ ನೀಡುವುದು ಹಾಗೂ ತತ್ಸಂಬಂಧವಾಗಿ ಪರಿಕಲ್ಪನೆ ಮತ್ತು ಸಿದ್ಧಾಂತಗಳನ್ನು ವಿಕಾಸಗೊಳಿಸುವುದು ಸಮಾಜಶಾಸ್ತ್ರದ ವಿಶಿಷ್ಟತೆಯಾಗಿದೆ. ಪ್ರಸ್ತುತ ನಿದರ್ಶನವು ವಾಸ್ತವದ ಅಧ್ಯಯನವನ್ನು ಆಧರಿಸಿದ ವೈಜ್ಞಾನಿಕ ಪರಂಪರೆಯಿಂದ ಪ್ರಭಾವಿತವಾಗಿದ್ದು, ನಮ್ಮ ಆಲೋಚನೆಗಳು (ನಮ್ಮ ಸಿದ್ಧಾಂತ) ಪ್ರಪಂಚದಲ್ಲಿ ಏನಾಗುತ್ತಿದೆ ಎಂಬುದರೊಂದಿಗೆ ಸಂಬಂಧ ಹೊಂದಿವೆಯೇ ಎಂಬುದನ್ನು ಪರಿಶೀಲಿಸಬಲ್ಲ ಅಧ್ಯಯನ ಮಾರ್ಗಗಳನ್ನು ಹೊಂದಿದೆ. ಅಲ್ಲದೆ ಇದು ಭೌತವಿಜ್ಞಾನದಂತಹ ವಿಜ್ಞಾನವಲ್ಲ. ಹಾಗಾಗಿ ಇದರಲ್ಲಿ ನಿಯಮಗಳಿಲ್ಲ. ಅಂದರೆ ನ್ಯೂಟನ್‌ನಿಂದ ಪ್ರಣೀತವಾದಂತಹ ಎಸೆದ ಕಲ್ಲಿನ ವಕ್ರರೇಖೆಯನ್ನು (ಟ್ರೆಜೆಕ್ಟರಿಯನ್ನು) ಊಹಿಸುವಂತಹ ಸಿದ್ಧನಿಯಮಗಳಿಲ್ಲ. ಮನುಷ್ಯರ ಭಾವನೆಗಳನ್ನು ಮತ್ತು ಅದರಲ್ಲಿ ಮನುಷ್ಯ ಸಮಾಜದ ಪಾತ್ರವನ್ನು ಅರ್ಥಮಾಡಿಕೊಳ್ಳುವುದು ಅತ್ಯಂತ ಜಟಿಲವೆಂಬಂತೆ ತೋರುತ್ತದೆ. ಇದು ಸುಲಭದ ಊಹೆಗೆ ನಿಲುಕುವಂಥದ್ದಲ್ಲ. ಎಲ್ಲಕ್ಕಿಂತ ಮಿಗಿಲಾಗಿ, ನಾವು ಆಲೋಚಿಸಬಲ್ಲವಾದ ಕಾರಣ ನಮ್ಮ ಮಾರ್ಗಗಳನ್ನು ಬದಲಿಸಿಕೊಳ್ಳಬಲ್ಲವು.

**ಸಾಮಾಜೀಕರಣ: ನಾವು ನಾವಾಗುವುದು**

ಲೋಕದಲ್ಲಿ ಜನಿಸಿದ ಎಲ್ಲರೂ ಹೆಚ್ಚು ಕಡಿಮೆ ಖಾಲಿ ಹಾಳೆಯಂತಿರುತ್ತಾರೆ ಮತ್ತು ಅವರ ವ್ಯಕ್ತಿತ್ವ, ನಂಬಿಕೆ ಮತ್ತು ಸಾಧನೆಗಳೆಲ್ಲವನ್ನೂ ಅವರು ತಮ್ಮ ಸುತ್ತಲಿನ ಜನಗಳೊಂದಿಗೆ ವ್ಯವಹರಿಸುವುದರ ಮೂಲಕ ನಿರ್ಮಿಸಿಕೊಂಡಿರುತ್ತಾರೆ ಎಂಬುದು ಸಮಾಜಶಾಸ್ತ್ರದ ಮೂಲ ನಿಯಮವಾಗಿದೆ. ಮಾನವ ಶಿಶು ಅದೆಷ್ಟು ಅಸಹಾಯಕವಾಗಿ ಜನಿಸಿರುತ್ತದೆ ಎಂದರೆ ಸಮಾಜದ ಇತರರು ಅದನ್ನು ಆರೈಕೆ ಮಾಡದೆ ಹೋದರೆ ಅದು ಕೆಲವು ದಿನಗಳ ನಂತರ ಬದುಕಲಾರದು. ತೋಳಗಳ ನಡುವೆ ಬೆಳೆದ ರುಡ್‌ಯಾರ್ಡ್ ಕಿಪ್ಲಿಂಗ್ ಬರೆದ 'ಜಂಗಲ್ ಬುಕ್'ನ ಮೊಗ್ಲಿ ಒಂದು ಮನೋರಂಜಕಾತ್ಮಕವಾದ ಕಟ್ಟುಕತೆಯಾಗಿದೆ. ಪ್ರಾಣಿಗಳ ನೆರವಿನಿಂದ ಉಳಿದು ಬೆಳೆದ ಅಪರೂಪದ ವ್ಯಕ್ತಿಯೋರ್ವನಲ್ಲಿ ನಾವು ಮನುಷ್ಯನಾಗಲು ಅಗತ್ಯವೆಂದು ಪರಿಗಣಿಸುವಂತಹ ಬಹುತೇಕ ಅಂಶಗಳು, ಅಂದರೆ ಸುಸಂಸ್ಕೃತವಾಗಿ ಮಾತನಾಡುವ, ಸಲಕರಣೆಗಳನ್ನು ಮಾಡುವ, ಒಂದು ಸಂಸ್ಕೃತಿ ಹೊಂದಿರುವ ಸಾಮರ್ಥ್ಯ ಇಲ್ಲದಿರುವುದು ಪತ್ತೆಯಾಗಿತ್ತು. ಸಮಾಜದ ನಾವೆಲ್ಲರೂ ಮಾನವರಾಗಿದ್ದೇವೆ. ಮತ್ತು ಜನಗಳ ನಡುವೆ ಕಂಡುಬರುವ ಹಲವಾರು ವ್ಯತ್ಯಾಸಗಳಿಗೂ-ಎಲ್ಲರಲ್ಲಿಯೂ ಅಲ್ಲದಿದ್ದರೂ- ಸಮಾಜವೇ ಕಾರಣವಾಗಿದೆ. ಸಮಾಜವು ಹೇಗೆ ವ್ಯಕ್ತಿಗಳನ್ನು ಪ್ರಾಮಾಣಿಕರನ್ನಾಗಿ ಅಥವಾ ಅಪ್ರಾಮಾಣಿಕರನ್ನಾಗಿ ಮಾಡುತ್ತದೆ, ಸಮಾಜಗಳು ಹೇಗೆ ಬದಲಾಗುತ್ತವೆ, ಒಂದು ಸಮಾಜದ ಯಾವೆಲ್ಲ ಅಂಶಗಳು ಬದಲಾಗತಕ್ಕದ್ದು ಎಂಬಿತ್ಯಾದಿ ವಿಷಯಗಳ ಅಧ್ಯಯನವನ್ನು ಇದು ಅತ್ಯಂತ ಆಸಕ್ತಿದಾಯಕವನ್ನಾಗಿಸುತ್ತದೆ. ಅಲ್ಲದೇ ಇದು ಮಾನವನ ಅಸ್ತಿತ್ವಕ್ಕೆ ಶಿಕ್ಷಣದ ಮಹತ್ತ್ವವೇನು ಎಂಬುದನ್ನು ಒತ್ತಿ ಹೇಳುತ್ತದೆ. ಶಿಕ್ಷಣದ ಮೂಲಕವೇ ಮಾನವರು ತಮ್ಮ ಚಾರಿತ್ರ್ಯ, ಜ್ಞಾನ ಮತ್ತು ತಮ್ಮ ಚಟುವಟಿಕೆಗಳನ್ನು ರೂಢಿಸಿಕೊಳ್ಳುತ್ತಾರೆ. ಅಂದ ಹಾಗೆ ಶಿಕ್ಷಣವೆನ್ನುವುದು ಕೇವಲ ಶಾಲೆಯಲ್ಲಿ ಮಾತ್ರವೇ ನಡೆಯುವುದಿಲ್ಲ; ಬದಲಾಗಿ ಸಮಾಜದ ಹಲವು ಸ್ಥಳಗಳಲ್ಲಿ ಅದು ಸಂಭವಿಸುತ್ತದೆ.

ಸಾಮಾಜೀಕರಣ ಎನ್ನುವುದು ಮಾನವನು ಒಂದು ಸಮಾಜದ ಸದಸ್ಯನಾಗುವುದನ್ನು ಕಲಿಯುವ ಪ್ರಕ್ರಿಯೆಯಾಗಿದೆ. ಖಂಡಿತವಾಗಿಯೂ, ಇದು ಸರಳವಾದ ಮತ್ತು ವಿವಾದರಹಿತವಾದ ಪ್ರಕ್ರಿಯೆಯೇನಲ್ಲ. ಸಾಮಾಜೀಕರಣವು ಉತ್ತಮವಾದ ಗುಲಾಮರನ್ನು, ಪ್ರಶ್ನಿಸಲರಿಯದ ವಿಧೇಯರನ್ನು ಸೃಷ್ಟಿಸಬೇಕು ಎಂದು ಕೆಲವರು ಬಯಸಿದರೆ ಮತ್ತೆ ಕೆಲವರು ಸಾಮಾಜೀಕರಣವು ಎಲ್ಲವನ್ನೂ ಪ್ರಶ್ನಿಸುವ, ಸ್ವಂತಿಕೆಯುಳ್ಳ ಚಿಂತಕರನ್ನು ಸೃಷ್ಟಿ ಮಾಡಬೇಕು ಎಂದು ಬಯಸುತ್ತಾರೆ. ನಾವು ಯಾವ ರೀತಿ ವ್ಯಕ್ತಿಗಳಾಗಿ ರೂಪುಗೊಳ್ಳುತ್ತೇವೆ ಎನ್ನುವುದರ ಮೇಲೆ ಸಮಾಜದ ಪಾತ್ರ ಏನು ಮತ್ತು ಇಂತಹ ವ್ಯಕ್ತಿಗಳಾಗುವುದರಿಂದ ಸಮಾಜದ ಮೇಲೆ ಉಂಟಾಗುವ ಪರಿಣಾಮ ಏನು ಎಂಬೆರಡು ಪ್ರಮುಖ ಪ್ರಶ್ನೆಗಳನ್ನು ಸಮಾಜಶಾಸ್ತ್ರವು ಚರ್ಚಿಸುತ್ತದೆ. ವ್ಯಕ್ತಿಗಳು ಅಗಾಧ ಸಾಧ್ಯತೆಗಳನ್ನು ಹೊಂದಿರುತ್ತಾರೆ ಎಂದು ಸಮಾಜಶಾಸ್ತ್ರಜ್ಞರು ನಂಬುತ್ತಾರೆ. ವ್ಯಕ್ತಿಗಳ ಈ ಸಾಧ್ಯತೆಗಳು ಸಾಕಾರಗೊಳ್ಳುತ್ತವೆಯೋ, ಇಲ್ಲವೋ ಎನ್ನುವುದು ಅವರ ಕಠಿಣವಾದ ಜಾಣ್ಮೆಯಿಂದ ಕೂಡಿದ ಪರಿಶ್ರಮದ ಮೇಲೆ, ಜೊತೆಗೆ ಒಂದು ಗಣನೀಯ ಮಟ್ಟದವರೆಗೆ ಸಮಾಜದಿಂದಲೂ ಪ್ರಭಾವಿತವಾಗಿರುತ್ತದೆ.

[ದೃಷ್ಟಾಂತ: ಮನುಸ್ಮೃತಿ, ಮಹಿಳೆ ಮತ್ತು ಶೂದ್ರರಿಗೆ ಶಿಕ್ಷಣವನ್ನು ನಿರಾಕರಿಸುವುದು. ಪ್ರಶ್ನೆ: ಶ್ಲೋಕವನ್ನು ಪಠಿಸುವ ಮತ್ತು ವ್ಯಾಖ್ಯಾನಿಸುವ ಸ್ಪರ್ಧೆಯಲ್ಲಿ ಮಹಿಳೆ ಮತ್ತು ಶೂದ್ರರು ಕಳಪೆ ಪ್ರದರ್ಶನ ನೀಡಿದರೆ, ಅದಕ್ಕೆ ಕಾರಣ ಅವರ ಜೈವಿಕತೆಯೇ, ವೈಯಕ್ತಿಕ ಚಾರಿತ್ರ್ಯವೇ ಅಥವಾ ಸಾಮಾಜಿಕ ವಾತಾವರಣವೆ? ಇಲ್ಲಿ ನಾವೀಗ ನಮಗೆ ನಾವೇ ಕೇಳಿಕೊಳ್ಳಬೇಕಾದ ಆಸಕ್ತಿದಾಯಕ ಪ್ರಶ್ನೆಯೆಂದರೆ, ಜನರು ತಾವು ಜನಿಸಿದ ಕುಟುಂಬದ ಕಾರಣದಿಂದಾಗಿ ಹಾಗೂ ಅವರು ಹೊಂದಿರುವ, ಇಲ್ಲವೇ ಹೊಂದಿಲ್ಲದಿರುವ, ಜನನೇಂದ್ರಿಯಗಳ ವ್ಯವಸ್ಥೆಯ ಕಾರಣದಿಂದಾಗಿಯೇ ಅವರು ಹಿಂದುಳಿಯದಿರುವಂತೆ ಮಾಡಲು ಎಂತಹ ಸಾಮಾಜಿಕ ವಾತಾವರಣವನ್ನು ನಾವು ರೂಪಿಸಬೇಕು?]

**ಭಾರತದಲ್ಲಿನ ಶಿಕ್ಷಣದ ಸಾಮಾಜಿಕ ಸಂಧರ್ಭ**

ಮುಂದುವರೆದಂತೆ, ನಾವು ಭಾರತದಲ್ಲಿ ಶಿಕ್ಷಣದ ಸಮಾಜಶಾಸ್ತ್ರೀಯ ಸಂದರ್ಭವನ್ನು ರೂಪಿಸಿದ ಮೂಲಭೂತ ಪ್ರಕ್ರಿಯೆಗಳನ್ನು ನೋಡೋಣ. ಈ ಪ್ರಕ್ರಿಯೆಗಳನ್ನು ಅರ್ಥ ಮಾಡಿಕೊಳ್ಳುವುದರಿಂದ ಭಾರತದ ಶಿಕ್ಷಣದ ಮೇಲಿನ ಪ್ರಭಾವಗಳು ಯಾವುವು ಮತ್ತು ಅದು ಎದುರಿಸುತ್ತಿರುವ ಸವಾಲುಗಳು ಎಂತಹವು ಎಂಬುದನ್ನು ಅರ್ಥಮಾಡಿಕೊಳ್ಳುವುದಕ್ಕೆ ಸಹಾಯಕವಾಗುತ್ತದೆ. ನಮ್ಮ ದಿನನಿತ್ಯದ ಹಲವು ಸಮಸ್ಯೆ ಮತ್ತು ಸಂದಿಗ್ಧತೆಗಳು ಈ ಪ್ರಕ್ರಿಯೆಗಳೊಂದಿಗೆ ಹೆಣೆದುಕೊಂಡಿವೆ. ಈ ಪ್ರಕ್ರಿಯೆಗಳನ್ನು ಸಾರಾಂಶೀಕರಿಸುವ ಪ್ರಯತ್ನವು ಇನ್ನೂ ಹಿರಿದಾದ ಸಮಸ್ಯೆಗಳ ಪರಿಶೀಲನೆಗೆ ನಮ್ಮನ್ನು ಸಜ್ಜುಗೊಳಿಸುತ್ತದೆ. ಕೆಳಗೆ ನೀಡಲಾಗುವ ಪಟ್ಟಿಯು ಸಂಪೂರ್ಣವಾದುದೆಂದು ಹೇಳಲಾರೆ. ಸದ್ಯಕ್ಕೆ ನಾನೀಗ ನಾಲ್ಕು ಪ್ರಕ್ರಿಯೆಗಳ ಬಗೆಗೆ ಮಾತನಾಡಲಿದ್ದೇನೆ:

1. **ಬದಲಾಗುತ್ತಿರುವ ನಮ್ಮ ಉತ್ಪಾದನೆ, ವಿನಿಮಯ ಮತ್ತು ಬಳಕೆಯ ವ್ಯವಸ್ಥೆ:** ಇದು ನಾವು ಯಾವ ಮೂಲ ಸಂಬಂಧಗಳ ಭಾಗವಾಗಿದ್ದೇವೆಯೋ ಅಂತಹ ಸಂಬಂಧಗಳನ್ನು ಪ್ರಭಾವಿಸುತ್ತದೆ. ಇದು ವಾಣಿಜ್ಯೀಕರಣ ಮತ್ತು ಶೋಷಣೆಗಳನ್ನು ಹೆಚ್ಚಿಸುತ್ತದೆ ಮತ್ತು ಹಿಂದಿನ ಹಲವು ಪ್ರಬಲ ವ್ಯವಸ್ಥೆಗಳನ್ನು ವಿಲೀನಗೊಳಿಸುತ್ತದೆ ಎಂದು ನಂಬಲಾಗಿದೆ. ನಿಶ್ಚಿತವಾಗಿ ಬಂಡವಾಳಶಾಹಿ ವ್ಯವಸ್ಥೆಯು, ನಿರ್ದಿಷ್ಟವಾಗಿ ಜಾಗತೀಕರಣದ ರೂಪದಲ್ಲಿ, ಇಂತಹ ಬದಲಾವಣೆಯ ಹಿಂದಿರುವ ಒಂದು ಚಾಲಕ ಶಕ್ತಿಯಾಗಿದೆ. ಇದರ ಜೊತೆಗೆ, ಗಳಿಸುವ ಲಾಭಕ್ಕಿಂತಲೂ ನೈತಿಕತೆ ಮತ್ತು ಸಂಸ್ಕೃತಿಗೆ ಹೆಚ್ಚಿನ ಪ್ರಾಧಾನ್ಯವಿರಬೇಕೆಂಬ ಬೇಡಿಕೆ ಮತ್ತು ಪ್ರಜಾತಾಂತ್ರಿಕವಾದ ರಾಜಕೀಯ ವ್ಯವಸ್ಥೆಗಳ ಪ್ರಭಾವಗಳೂ ಸೇರಿದಂತೆ ಹಲವು ಧ್ವನಿಗಳು ಕೇಳಿಬರುತ್ತಿವೆ. ಶಿಕ್ಷಣವು ಜನರನ್ನು ಈ ಪ್ರಕಿಯೆಗೆ ತೊಡಗಿಸುತ್ತದೆ ಮತ್ತು ತಾನೇ ಇವುಗಳಿಂದ ಪ್ರಭಾವಗೊಳ್ಳುತ್ತದೆ.
2. **ಇನ್ನೂ ಮಿಗಿಲಿನ ಸಾಮಾಜಿಕ ಸಂಕೀರ್ಣತೆ:** ಅನೇಕ ಸಾಮಾಜಿಕ ಗುಂಪುಗಳು ಒಂದು ಇನ್ನೊಂದರೊಂದಿಗೆ ಬೆರೆತು ಜೀವನ ನಡೆಸಬೇಕಾಗುತ್ತದೆ ಮತ್ತು ಒಂದು ಇನ್ನೊಂದನ್ನು ತುಳಿಯುವುದು ಇಲ್ಲಿ ಸ್ವೀಕಾರಾರ್ಹ ಆಯ್ಕೆಯಾಗಿ ಉಳಿದಿಲ್ಲ. ಇದು ಕೈಗಾರಿಕೀಕರಣದಿಂದ ಮತ್ತು ಆಧುನಿಕ ರಾಜಕೀಯ ವ್ಯವಸ್ಥೆಗಳಿಂದ ಚಾಲಿತವಾಗಿದೆ. ಶಿಕ್ಷಣವು ಸಮುದಾಯಗಳ ಸ್ವಾಯತ್ತತೆ ಹಾಗೂ ಜೀವಂತಿಕೆಯನ್ನು ಕಾಪಾಡಿಕೊಂಡೇ ಅವನ್ನು ಪರಸ್ಪರ ಒಗ್ಗೂಡಿಸಬಲ್ಲ ಸಂಸ್ಕೃತಿಗಳನ್ನು ಅನ್ವೇಷಿಸುವ ಸಮಸ್ಯೆಯನ್ನು ಎದುರಿಸುತ್ತದೆ.
3. **ಅಧಿಕಾರಶಾಹಿ ಸಂಘಟನೆಗಳ ಬೆಳವಣಿಗೆ:** ಸಮಾಜ ಮತ್ತು ಸಂಘಟನೆಗಳು ದೊಡ್ಡವಾದಂತೆ ಅವು ತಮ್ಮ ಕಾರ್ಯವಿಧಾನವನ್ನು ಬದಲಾಯಿಸಿಕೊಳ್ಳಬೇಕಾಗುತ್ತದೆ. ನಿಯಮಗಳ ಅಭಿವೃದ್ಧಿ ಹಾಗೂ ಮಾನವಗುಣ

ರಹಿತವಾದ ಕಾರ್ಯಚಟುವಟಿಕೆ ಇದು ಪಡೆದುಕೊಳ್ಳುವ ಒಂದು ಪ್ರಮುಖವಾದ ರೂಪವಾಗಿದೆ. ಶೈಕ್ಷಣಿಕ ಸಂಸ್ಥೆಗಳಲ್ಲಿ ಹಾಗೂ ಸರ್ಕಾರದಲ್ಲಿ ಈ ಬದಲಾವಣೆ ವ್ಯಕ್ತವಾಗುತ್ತದೆ. ಶಿಕ್ಷಣದ ಮೇಲಿನ ಹಲವು ಪ್ರಮುಖ ವಾಗ್ವಾದಗಳು ಈ ಪಲ್ಲಟದಿಂದಲೇ ಹುಟ್ಟಿಕೊಂಡಿವೆ.

4. **ವೈಯಕ್ತಿಕ ಮತ್ತು ಸಾಮಾಜಿಕ ಚಹರೆ:** ನಾವು ಯಾರು ಎನ್ನುವ ಪ್ರಜ್ಞೆಯ ಆಧಾರದ ಮೇಲೆ ನಾವು ಸಮಾಜದಲ್ಲಿ ಕ್ರಿಯಾಶೀಲರಾಗುತ್ತೇವೆ. ಇದು ಯಾವಾಗಲೂ ಪೂರ್ವ ನಿರ್ಧರಿತವಾಗಿ ಇರುವುದಿಲ್ಲ. ಇದು ನಿರಂತರವಾಗಿ ರೂಪುಗೊಳ್ಳುತ್ತಲೇ ಇರುತ್ತದೆ. ಇದರ ಜೊತೆಗೆ ತನ್ನ ಸಮಗ್ರತೆಯ ಪ್ರಜ್ಞೆಯನ್ನು ಉಳಿಸಿಕೊಳ್ಳಲು ನಿರಂತರವಾಗಿ ಹೋರಾಡುತ್ತಲೇ ಇರುತ್ತದೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವಿನ ಘರ್ಷಣೆಗಳು ಹೆಚ್ಚಿನ ಸಂದರ್ಭಗಳಲ್ಲಿ ಈ ಪ್ರಕ್ರಿಯೆಯ ಅಭಿವ್ಯಕ್ತಿಯೇ ಆಗಿರುತ್ತದೆ. ಅದೇ ರೀತಿ ಶಿಕ್ಷಣದಲ್ಲಿ ಭಾಷೆ, ಪ್ರಾದೇಶಿಕ ಮತ್ತು ರಾಷ್ಟ್ರೀಯ ಅಸ್ಮಿತೆ ಮುಂತಾದ ಅನೇಕ ಪ್ರಶ್ನೆಗಳೂ ಕೂಡ.

***

**ಪರಾಮರ್ಶನ ಗ್ರಂಥಗಳು:**


- Marx, Karl. 1852. The Eighteenth Brumaire of Louis Bonaparte. Champaign, Ill.: Project Gutenberg. http://www.gutenberg.org/files/1346/1346-h/1346-h.htm.
- Mead, Margaret. 1970. Culture and Commitment a Study of the Generation Gap. [1st ed.]. Garden City, N.Y: Published for the American Museum of Natural History, Natural History Press.
- Rao, S. Srinivasa. 2013. “Structural Exclusion in Everyday Institutional Life: Labelling of Stigmatized Groups in an IIT.” In Sociology of Education in India: Changing Contours and Emerging Concerns, edited by Geetha Nambissan and S. Srinivasa Rao, 199–223. New Delhi: Oxford University Press.